# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 448
ಸದಸ್ಯರ ಹೆಸರು : ಶ್ರೀಮತಿ ಎಸ್.ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 15-09-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯ ಜಮ್ಮಾ ಭೂಹಿಡುವಳಿದಾರರ ಹಿತರಕ್ಷಣೆಗೆ ಸಂಬಂಧಿಸಿದಂತೆ ಸರ್ಕಾರದ ನಿಲುವುಗಳೇನು; ಆ ಕುರಿತು ರೂಪಿಸಿರುವ ನಿಯಮಗಳೇನು; | ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 79 (2) ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಕುಮ್ಕಿ ಭೂಮಿಗಳು, ಬಾಣೆ ಭೂಮಿಗಳು ಮತ್ತು ಉತ್ತರ ಕನ್ನಡ ಜಿಲ್ಲೆಯಲ್ಲಿನ ಕಾಣೆ ಭೂಮಿಗಳು, ಬೆಟ್ಟ ಭೂಮಿಗಳು ಮತ್ತು ಹಾಡಿ ಭೂಮಿಗಳು, ಮೈಸೂರು ಪ್ರದೇಶದಲ್ಲಿನ ಕಾನು ಮತ್ತು ಸೊಪ್ಪಿನ ಬೆಟ್ಟ ಭೂಮಿಗಳು, ಕೊಡಗಿನ ಜಮ್ಮಾ ಮತ್ತು ಬಾಣೆ ಭೂಮಿಗಳು, ಹೈದರಾಬಾದ್ ಪ್ರದೇಶದಲ್ಲಿನ ಮೋಟಸ್ಥಲ್ ತರಿ ಭೂಮಿಗಳು ಇವುಗಳ ಬಗೆಗಿನ ವಿಶೇಷಾಧಿಕಾರಗಳು ಮುಂದುವರೆಯತಕ್ಕದ್ದು ಎಂದು ತಿಳಿಸಲಾಗಿದ್ದು, ಯಾವುದೇ ಭೂಮಿಯನ್ನು ಮಂಜೂರು ಮಾಡಲು ಅವಕಾಶವಿರುವುದಿಲ್ಲ.<br><br>2021-22 ನೇ ಸಾಲಿನ ಆಯವ್ಯಯ ಭಾಷಣದ ಖಂಡಿಕೆ 306 ರಲ್ಲಿ ಮೂಲ ಗೇಣಿದಾರರು, ಕುಮ್ಕಿ ಜಮೀನು, ಖಾನೇ, ಬಾನೇ, ಡೀಮ್ಡ್ ಅರಣ್ಯ ಸಾಗುವಳಿದಾರರ ಸಮಸ್ಯೆಗಳ ಕುರಿತು ಅಧ್ಯಯನ ನಡೆಸಿ ಪರಿಹಾರೋಪಾಯಗಳನ್ನು ಕಂಡುಕೊಳ್ಳಲು ಪ್ರತ್ಯೇಕ ಸಮಿತಿಯನ್ನು ರಚಿಸಲಾಗುವುದು ಎಂದು ಘೋಷಿಸಲಾಗಿರುತ್ತದೆ.<br><br>ಅದರಂತೆ, ಪ್ರತ್ಯೇಕ ಸಮಿತಿಯನ್ನು ರಚಿಸಲು ಕ್ರಮವಹಿಸಲಾಗುತ್ತಿದೆ. |

. . . . 2)

| | | |
|---|---|---|
| ಆ) | ಜಮ್ಮಾ ಮಲೆ ಮೇಲಿನ ಹಕ್ಕನ್ನು ಬಿಟ್ಟುಕೊಡಲು ಸಿದ್ಧರಿರುವವರಿಗೆ ಪರಿಹಾರ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಂತಹ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಇ) | ಕ್ಯಾಂಪ್ ನಿಧಿಯನ್ನು ಬಳಸಿ ಜಮ್ಮಾ ಮಲೆ ಹಕ್ಕುದಾರರಿಗೆ ಪರಿಹಾರ ಪಾವತಿಸಲು ಸರ್ಕಾರ ಏಕೆ ಮುಂದಾಗುತ್ತಿಲ್ಲ? | |

ಸಂಖ್ಯೆ: ಆರ್‌ಡಿ 135 ಎಲ್‌ಜಿಕ್ಯೂ 2021 (ಇ)

(ಆರ್. ಅಶೋಕ)
ಕಂದಾಯ ಸಚಿವರು.